

# ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 1353 |
| ಮಾನ್ಯ ಸದಸ್ಯರ ಹೆಸರು | ಶ್ರೀ ಐವನ್ ಡಿ'ಸೋಜಾ<br>(ನಾಮನಿರ್ದೇಶನ ಹೊಂದಿದವರು) |
| ಉತ್ತರಿಸಬೇಕಾದ ದಿನಾಂಕ | 18.03.2020 |
| ಉತ್ತರಿಸುವ ಸಚಿವರು | ವಸತಿ ಸಚಿವರು |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ | 2018-19, 2019-20 ಮತ್ತು 2020-21ರಲ್ಲಿ ಮಂಗಳೂರು ಮಹಾನಗರ ವ್ಯಾಪ್ತಿಯಲ್ಲಿ ಎಷ್ಟು ಮನೆಗಳನ್ನು ನಿರ್ಮಿಸಲು ಮಂಜೂರಾತಿ ನೀಡಲಾಗಿದೆ; ಎಷ್ಟು ಮನೆಗಳು ಪೂರ್ಣಗೊಂಡಿದೆ; (ವಿವರ ನೀಡುವುದು) | 2018-19, 2019-20 ಮತ್ತು 2020-21ನೇ ಸಾಲುಗಳಲ್ಲಿ ಮಂಗಳೂರು ಮಹಾನಗರ ವ್ಯಾಪ್ತಿಯಲ್ಲಿ ವಿವಿಧ ವಸತಿ ಯೋಜನೆಗಳಡಿ ಒಟ್ಟು 293 ಮನೆಗಳನ್ನು ನಿರ್ಮಿಸಲು ಮಂಜೂರಾತಿ ನೀಡಲಾಗಿದೆ. 2020-21ನೇ ಸಾಲಿಗೆ ಗುರಿಯನ್ನು ನಿಗದಿಪಡಿಸಬೇಕಾಗಿದ್ದು, 2018-19, 2019-20ನೇ ಸಾಲಿನ ವಿವರಗಳು ಈ ಕೆಳಕಂಡಂತಿವೆ:- |

| ಯೋಜನೆ | 2018-2019 | | 2019-2020 | | ಒಟ್ಟು | |
|---|---|---|---|---|---|---|
| | ಗುರಿ | ಪೂರ್ಣ | ಗುರಿ | ಪೂರ್ಣ | ಗುರಿ | ಪೂರ್ಣ |
| ಡಾ: ಬಿ.ಆರ್. ಅಂಬೇಡ್ಕರ್ ನಿವಾಸ್ ಯೋಜನೆ | 5 | 9 | 4 | 2 | 9 | 11 |
| ವಾಜಪೇಯಿ ನಗರ ವಸತಿ ಯೋಜನೆ | 244 | 125 | 40 | 77 | 284 | 202 |
| **ಒಟ್ಟು** | **249** | **134** | **44** | **79** | **293** | **213** |

ಪ್ರಧಾನ ಮಂತ್ರಿ ಆವಾಸ್ ಯೋಜನೆ (ನಗರ)ದ ಎಹೆಚ್‌ಪಿ ಘಟಕದಡಿ ಮಂಗಳೂರು ಮಹಾನಗರ ವ್ಯಾಪ್ತಿಯಲ್ಲಿ 2016-17 ಸಾಲಿನಿಂದ 2019-20ನೇ ಸಾಲಿನವರೆಗೆ 6 ಯೋಜನೆಗಳಲ್ಲಿ ಒಟ್ಟು 2854 ಮನೆಗಳನ್ನು ನಿರ್ಮಿಸಲು ಕೇಂದ್ರ ಸರ್ಕಾರವು ಮಂಜೂರಾತಿ ನೀಡಿರುತ್ತದೆ.

ಆ ಪೈಕಿ ಇಡ್ಯಾ ಗ್ರಾಮದ ಸರ್ವೆ ನಂ.16 ಪಿ 1ರಲ್ಲಿ 600 ಮನೆಗಳನ್ನು ಜಿ+3 ಮಾದರಿಯಲ್ಲಿ ನಿರ್ಮಾಣ ಮಾಡಲು ಮಂಜೂರಾತಿ ನೀಡಲಾಗಿದೆ.

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಆ | 2018-19ರಲ್ಲಿ ಮಂಗಳೂರು ದಕ್ಷಿಣ ವಿಧಾನಸಭಾ ಕ್ಷೇತ್ರ ವ್ಯಾಪ್ತಿಯಲ್ಲಿ ವಿತರಣೆ ಮಾಡಲಾದ ಮನೆಗಳು ನಿರ್ಮಾಣಗೊಂಡಿದೆಯೇ; ಇಲ್ಲದಿದ್ದರೆ, ಕಾರಣ ನೀಡುವುದು; | ಪದವು ಗ್ರಾಮದ ಸ.ನಂ.82ರಲ್ಲಿ 930 ಮನೆಗಳನ್ನು ಜಿ+3 ಮಾದರಿಯಲ್ಲಿ ನಿರ್ಮಿಸಿ ವಿತರಿಸುವ ಕಾಮಗಾರಿಗೆ ಟೆಂಡರು ಪ್ರಕ್ರಿಯೆಯ ಸಂದರ್ಭದಲ್ಲಿ ಯೋಜನಾ ಪ್ರದೇಶದಲ್ಲಿರುವ ಮರಗಳನ್ನು ತೆರವುಗೊಳಿಸಲು ಪರಿಸರವಾದಿಗಳು ಆಕ್ಷೇಪಣೆ ಸಲ್ಲಿಸಿರುತ್ತಾರೆ. ಈ ಬಗ್ಗೆ ಕೇಂದ್ರ ಸರ್ಕಾರದ ಪರಿಸರ, ಅರಣ್ಯ ಮತ್ತು ಹವಾಮಾನ ಬದಲಾವಣೆ ಮಂತ್ರಾಲಯದಿಂದ ಅನುಮತಿ ಪಡೆಯುವ ಪ್ರಕ್ರಿಯೆ ಪ್ರಗತಿಯಲ್ಲಿದೆ. |
| ಇ | ಮಂಗಳೂರು ದಕ್ಷಿಣ ವಿಧಾನಸಭಾ ಕ್ಷೇತ್ರ ವ್ಯಾಪ್ತಿಯಲ್ಲಿ ಮನೆ ನಿವೇಶನಗಳ ಫಲಾನುಭವಿಗಳಿಗೆ ಆಯ್ಕೆ ಮಾಡುವ ಸಂದರ್ಭದಲ್ಲಿ ಯಾವ ಮಾನದಂಡಗಳನ್ನು ಅನುಸರಿಸಲಾಗಿದೆ; ಎಷ್ಟು ಸಭೆಗಳು ನಡೆದಿರುತ್ತದೆ; ಮತ್ತು ಎಲ್ಲಿ ಸಭೆಗಳನ್ನು ನಡೆಸಲಾಗಿದೆ; (ವಿವರ ನೀಡುವುದು) | ವಿವಿಧ ವಸತಿ ಯೋಜನೆಗಳಡಿ ವಸತಿರಹಿತ ಫಲಾನುಭವಿಗಳನ್ನು ಆಯ್ಕೆ ಮಾಡಲು ಈ ಕೆಳಕಂಡ ಮಾನದಂಡಗಳನ್ನು ಕಡ್ಡಾಯವಾಗಿ ಅನುಸರಿಸಲಾಗುತ್ತಿದೆ:-<br><br>1. ಅರ್ಜಿದಾರರು ಮಹಿಳೆಯಾಗಿರಬೇಕು.<br>2. ಮಾಜಿ ಯೋಧರು, ವಿಧುರರು, ಅಂಗವಿಕಲರು ಮತ್ತು ಹಿರಿಯ ನಾಗರೀಕರಾಗಿದ್ದಲ್ಲಿ ಪುರುಷರು ಸಹಾ ಅರ್ಹರಾಗಿರುತ್ತಾರೆ.<br>3. 2018ನೇ ಸಾಲಿನ ಕೇಂದ್ರ ಸರ್ಕಾರದ ಮಾರ್ಗಸೂಚಿಯನ್ವಯ ಗುರುತಿಸಲಾದ ವಸತಿರಹಿತರ ಸಮೀಕ್ಷೆಯ ಪಟ್ಟಿಯಲ್ಲಿದ್ದು, ಸ್ವಂತ ನಿವೇಶನ ಹೊಂದಿರಬೇಕು.<br>4. ಅರ್ಜಿದಾರರ ಕುಟುಂಬವು ಆರ್ಥಿಕವಾಗಿ ಮತ್ತು ಸಾಮಾಜಿಕವಾಗಿ ಹಿಂದುಳಿದಿದ್ದು, ವಾರ್ಷಿಕ ಆದಾಯವು ಗ್ರಾಮೀಣ ಪ್ರದೇಶದವರಾಗಿದ್ದಲ್ಲಿ, ರೂ. 32000/-ಕ್ಕಿಂತ ಕಡಿಮೆ ಇರಬೇಕು ಮತ್ತು ನಗರ ಪ್ರದೇಶದಲ್ಲಿ ರೂ.87,600/-ರ ಒಳಗಿನ ಮಿತಿಯಲ್ಲಿರಬೇಕು.<br>5. ಅರ್ಜಿದಾರರ ಕುಟುಂಬವು ವಸತಿರಹಿತರಾಗಿದ್ದು, ಅರ್ಜಿದಾರರು ಅಥವಾ ಕುಟುಂಬದ ಯಾವುದೇ ಸದಸ್ಯರ ಹೆಸರಿನಲ್ಲಿ ಕರ್ನಾಟಕದ ಯಾವುದೇ ಭಾಗದಲ್ಲಿ ಸ್ವಂತ ಮನೆಯನ್ನು ಹೊಂದಿರಬಾರದು. |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| | | 6. ಅರ್ಜಿದಾರರು ಶಿಥಿಲಗೊಂಡ ಮನೆ ಅಥವಾ ಗುಡಿಸಲಿನಲ್ಲಿ ವಾಸಿಸುತ್ತಿದ್ದಲ್ಲಿ, ಅರ್ಹರಾಗಿರುತ್ತಾರೆ.<br>7. ಅರ್ಜಿದಾರರು ಸ್ವಂತ ನಿವೇಶನ ಹೊಂದಿದ್ದು, ನಿವೇಶನಕ್ಕೆ ಸಂಬಂಧಿಸಿದಂತೆ ಖಾತೆ ಹೊಂದಿರಬೇಕು (ಪಾರಂಪರಿಕ ಅರಣ್ಯ ಹಕ್ಕುಗಳ ಕಾಯ್ದೆಯನ್ವಯ ಜಿಲ್ಲಾ ಸಮಿತಿಯಿಂದ ನೀಡಲಾದ ಹಕ್ಕುಪತ್ರ ಪಡೆದಿದ್ದಲ್ಲಿ, ವಸತಿ ಸೌಕರ್ಯ ಪಡೆಯಲು ಪರಿಗಣಿಸಲಾಗುತ್ತದೆ.).<br>8. ಬೇರೆ ಯಾವುದೇ ಯೋಜನೆ/ ಇಲಾಖೆಯಿಂದ ಈಗಾಗಲೇ ವಸತಿ ಸೌಲಭ್ಯ ಪಡೆದಿರಬಾರದು.<br>9. ಪ್ರಧಾನ ಮಂತ್ರಿ ಆವಾಸ್ ಯೋಜನೆಯಡಿ (ಗ್ರಾಮೀಣ) ವಸತಿ ಸೌಲಭ್ಯ ಪಡೆಯಲು ಕೇಂದ್ರ ಸರ್ಕಾರದಿಂದ ನೀಡಲಾದ ಸಾಮಾಜಿಕ,ಆರ್ಥಿಕ ಮತ್ತು ಜಾತಿ ಜನಗಣತಿ, 2011ರ ಪಟ್ಟಿಯಲ್ಲಿ ಹೆಸರು ಸೇರಿರಬೇಕು.<br>10. ಡಾ: ಬಿ.ಆರ್. ಅಂಬೇಡ್ಕರ್ ವಸತಿ ಯೋಜನೆಯಡಿ ವಸತಿ ಸೌಲಭ್ಯ ಪಡೆಯಲು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗಕ್ಕೆ ಸೇರಿದವರಾಗಿರಬೇಕು.<br>11. 2017-18 ರಿಂದ ಈ ವರ್ಗದ ವಸತಿರಹಿತರಿಗೆ ಬೇಡಿಕೆ ಆಧಾರಿತವಾಗಿ ವಸತಿ ಕಲ್ಪಿಸಲಾಗುತ್ತಿದೆ.<br><br>ಮಂಗಳೂರು ನಗರ ದಕ್ಷಿಣ ವಿಧಾನಸಭಾ ಕ್ಷೇತ್ರದ ವ್ಯಾಪ್ತಿಯ ಮಾನ್ಯ ಶಾಸಕರ ಅಧ್ಯಕ್ಷತೆ ಹಾಗೂ ಅವರ ಕಛೇರಿಯಲ್ಲಿ ಅನುಕ್ರಮವಾಗಿ ದಿನಾಂಕ: 01.07.2016, 19.08.2016, 15.07.2017 ಮತ್ತು 15.12.2017 ರಂದು ಒಟ್ಟು ನಾಲ್ಕು ನಗರ ಆಶ್ರಯ ಸಮಿತಿ ಸಭೆಗಳು ನಡೆದಿರುತ್ತವೆ. |

| ಕ್ರ. ಸಂ. | ಪ್ರಶ್ನೆ | ಉತ್ತರ |
| --- | --- | --- |
| ಈ | ವಸತಿ ಯೋಜನೆ ಅನ್ವಯ ಫಲಾನುಭವಿಗಳ ಆಯ್ಕೆಗೆ ಸಭೆಯನ್ನು ನಿಯಮಾನುಸಾರವಾಗಿ ನಡೆಸಲಾಗಿದೆಯೇ; ಈ ಬಗ್ಗೆ ಇಲಾಖೆ ಕೈಗೊಂಡ ಕ್ರಮವೇನು? | ಹೌದು.<br><br>ಏಳು ದಿನಗಳ ಮುಂಚಿತವಾಗಿ ಸಭಾ ಸೂಚನಾ ಪತ್ರವನ್ನು ಹೊರಡಿಸಿ (ಜಾರಿಗೊಳಿಸಿ), ಸಭೆಯ ಕಾರ್ಯಸೂಚಿಯನ್ವಯ ವಿಷಯಗಳನ್ನು ಸಭೆಯಲ್ಲಿ ಮಂಡಿಸಿ, ಫಲಾನುಭವಿಗಳ ಆಯ್ಕೆ ಅಥವಾ ತಿರಸ್ಕೃತಗೊಳಿಸುವ ಬಗ್ಗೆ ಅಗತ್ಯ ಕ್ರಮ ವಹಿಸಲಾಗಿದೆ / ವಹಿಸಲಾಗುತ್ತಿದೆ. |

[ಸಂಖ್ಯೆ: ವಇ 52 ಹೆಚ್ಎಫ್ಎ 2020]

(ವಿ. ಸೋಮಣ್ಣ)
ವಸತಿ ಸಚಿವರು.